| Sl.No. | Division | Sub-Division | Name of work | Indent No. | Head of Account | BR No. | Date | Pending Bill Amount | Name of the Agency | Status o. .ork |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 10 |
| 9 | Raichur | Lingasugur | Improvements to road from Yaradona - Nawalkal via Hutti, Chincharki Road from KM. 14.00 to 24.70 (Working Ch. 13.10 Km to 20.10 Km) In Lingasugur taluka, Raichur District | 101635 | 5054-04-337-0-01-154 | 201 | 11.09.20 | 320.17 | M.H. Ammapur | Work under progress. |
| 10 | Raichur | Lingasugur | Improvements to from Lingasagur to SH-19 via Kalapur,Guntagola road from Km 22.70 to 25.00 (Working from KM 23.00 to 25.00 ) In Lingasugur taluka & Constituency Raichur District. Under 5054-Appendix-E MDR Improvements for the Year 2018-19. | 99423 | 5054-04-337-0-01-154 | 310 | 30.11.20 | 81.18 | Vithal Yadav | Work under progress. |
| | | | **Total** | | | | | **1148.97** | | |
| 1 | Raichur | Lingasugur | Annual Maintenance of Mudgal-Kudtinni SH-29 km 0.00 to 20.20 in Lingsugur Taluka Raich Dist in Lingsugur Taluka Raich Dist Under 3054 (Non-Plan) SH Maintenance for the Year 2020-21. | 125267 | 3054-03-337-0-05-200 | 289 | 11.11.20 | 4.93 | Raja Hussain | Work completed. |
| 2 | Raichur | Lingasugur | Annual Maintenance of Chickhesarur Mudgal Mundergi SH-129 km 0.00 to 5.00 and 8.20 to 17.50 and 46.00 to 52.43 in Lingsugur Taluka Raich Dist Under 3054 (Non-Plan) SH Maintenance for the Year 2020-21. WORK_INDENT125274 | 125274 | 3054-03-337-0-05-200 | 290 | 11.11.20 | 14.88 | Saidappa Y Kattimani | Work completed. |
| 3 | Raichur | Lingasugur | Annual Maintenance road from Raichur to Bachi SH-20 KM 74.76 to 90.00,97.60 to110 &114 to 126.75 In Lingasagur taluka, Raichur District Under 3054-04-337-05-0-200(Non-Plan)SH Road Maintenance for the year 2020-21(Sl No-2) WI 125291 | 125291 | 3054-03-337-0-05-200 | 291 | 13.11.20 | 8.69 | Prashant | Work completed. |
| | | | **Total** | | | | | **28.50** | | |
| 1 | Raichur | Lingasugur | Reasphalting to road from Amdhihal to Sajjalagudda via Bommanal road Km 7.00 to 14.00 In Lingasugur taluka and Constituency Raichur District. Under 3054-04-337-1-09-172 CMGRY for 2019-20 | 106920 | 3054-04-337-1-09-172 | 278 | 06.11.20 | 39.13 | H Rajashekar patil | Work completed |
| | | | **Total** | | | | | **39.13** | | |
| 1 | Raichur | Lingasugur | AME for Yaradoni - Navalkal via Hatti chinchiriki Road km 9.00 to 24.00, Lingasagur - SH-19 via Kalapur-Guntgol-Amareswara Road km 0.00 to 21.00, Ramatnal - Taluka Border km 1.45 to 4.05, Roudalabanda - Sjjalagudda km 12.00 to 13.40 & 17.00 to 18.50, Ramadurga - Manvi SH-14 to Ankanal via Halkavatigi Km 1.20 to 9.00, Veerapur cross - Kavital via Anwari Hirenaganur Km 0.00 to 10.60, Gurugunta - Hosur via Goudur Yelgatta Road Km 0.00 to 19.00, Sriranagapattana - Jewargi SH-19 to Yelagatta | 117770 | 3054-04-337-1-10-200 | 1039 | 30.03.20 | 27.35 | Eranna | Work completed |
| | | | **Total** | | | | | **27.35** | | |
| | | | **Total Grant** | | | | | **1741.72** | | |

Executive Engineer,
PW, P&IWTD, Division, Raichur

**ಕರ್ನಾಟಕ ಸರ್ಕಾರ**

ಸಂಖ್ಯೆ: ವಇ 437 ಎಚ್‌ಎಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ.
ಬೆಂಗಳೂರು, ದಿನಾಂಕ:22.01.2021

ಇಂದ:
ಸರ್ಕಾರದ ಕಾರ್ಯದರ್ಶಿ,
ವಸತಿ ಇಲಾಖೆ
ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ನರೇಂದ್ರ ಆರ್, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1249ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ, ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/8ಅ/ಚುಗು-ಚುರ.ಪ್ರಶ್ನೆ/06 /2020,ದಿನಾಂಕ:08.12.2020.

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ನರೇಂದ್ರ ಆರ್, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1249ಕ್ಕೆ ಮಾನ್ಯ ವಸತಿ ಸಚಿವರು ಉತ್ತರಿಸಿರುವ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,
22/1
(ಮಾಳಪ್ಪ ವೈ ಕನ್ನೂರ)
ಶಾಖಾಧಿಕಾರಿ-2
ವಸತಿ ಇಲಾಖೆ.

25/1/21

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ನರೇಂದ್ರ ಆರ್. (ಹನೂರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1249** |
| ಉತ್ತರಿಸಬೇಕಾದ ದಿನಾಂಕ | : | 14.12.2020 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ ಮೂರು ವರ್ಷಗಳಿಂದ ಚಾಮರಾಜನಗರ ಜಿಲ್ಲೆಯಲ್ಲಿ ವಿವಿಧ ವಸತಿ ಯೋಜನೆ ಅಡಿಯಲ್ಲಿ ಎಷ್ಟು ಮನೆಗಳು ಮಂಜೂರಾಗಿದೆ ; ಈ ಪೈಕಿ ಪೂರ್ಣಗೊಂಡ ಹಾಗೂ ಅಪೂರ್ಣಗೊಂಡ ಮನೆಗಳೆಷ್ಟು (ವಿವರ ನೀಡುವುದು) | ಕಳೆದ ಮೂರು ವರ್ಷಗಳಿಂದ ಚಾಮರಾಜನಗರ ಜಿಲ್ಲೆಯಲ್ಲಿ ವಿವಿಧ ವಸತಿ ಯೋಜನೆಗಳಡಿಯಲ್ಲಿ 20196 ಮನೆಗಳು ಮಂಜೂರಾಗಿರುತ್ತವೆ. ಸದರಿ ಮಂಜೂರಾದ ಮನೆಗಳ ಪೈಕಿ 7931 ಮನೆಗಳು ಪೂರ್ಣಗೊಂಡಿರುತ್ತವೆ ಹಾಗೂ 7106 ಮನೆಗಳು ವಿವಿಧ ಹಂತದ ಪ್ರಗತಿಯಲ್ಲಿರುತ್ತವೆ. ಯೋಜನಾವಾರು ವಿವರ ಕೆಳಕಂಡಂತಿದೆ : |

| ಯೋಜನೆ | ಮಂಜೂರಾದ ಮನೆ | ಪೂರ್ಣಗೊಂಡ ಮನೆಗಳು | ಪ್ರಗತಿಯಲ್ಲಿರುವ ಮನೆಗಳು |
|---|---|---|---|
| ಬಸವ ವಸತಿ ಯೋಜನೆ | 8035 | 3296 | 3380 |
| ಡಾ\|\|ಬಿ.ಆರ್ ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾ)& (ನ) | 2916 | 1146 | 1083 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾ) | 6919 | 2911 | 1859 |
| ದೇವರಾಜ ಅರಸು ವಸತಿ ಯೋಜನೆ (ಗ್ರಾ) & (ನ) | 143 | 16 | 81 |
| ವಾಜಪೇಯಿ ನಗರ ವಸತಿ ಯೋಜನೆ | 918 | 463 | 257 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ ನಗರ | 1265 | 99 | 446 |
| ಒಟ್ಟು | **20196** | **7931** | **7106** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಆ) | ಅಪೂರ್ಣಗೊಂಡಿರುವ ಮನೆಗಳನ್ನು ಪೂರ್ಣಗೊಳಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು (ವಿಧಾನ ಸಭಾ ಕ್ಷೇತ್ರವಾರು ವಿವರ ನೀಡುವುದು) | ಗ್ರಾಮ ಪಂಚಾಯತ್ ಮತ್ತು ನಗರ ಮಟ್ಟದಲ್ಲಿ ಅನುಷ್ಠಾಧಿಕಾರಿಗಳ ಮೂಲಕ ಫಲಾನುಭವಿಗಳಿಗೆ ನೋಟೀಸ್ ಅನ್ನು ಜಾರಿ ಮಾಡಿ ಪೂರ್ಣಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>ವಿವಿಧ ವಸತಿ ಯೋಜನೆಯಡಿಯಲ್ಲಿ ನೀಡಲಾದ ಮನೆಗಳನ್ನು ಪೂರ್ಣಗೊಳಿಸುವ ಸಂಬಂಧ ವೀಡಿಯೋ ಕಾನ್ಫರೆನ್ಸ್ ಮೂಲಕ ಪ್ರಗತಿಯನ್ನು ಪರಿಶೀಲಿಸಲಾಗುತ್ತಿದ್ದು, ಮನೆಗಳನ್ನು ಕೂಡಲೇ ಪೂರ್ಣಗೊಳಿಸುವಂತೆ ಅನುಷ್ಠಾನಾಧಿಕಾರಿಗಳಿಗೆ ಸೂಚಿಸಲಾಗಿದೆ.<br><br>ವಿಧಾನ ಸಭಾ ಕ್ಷೇತ್ರವಾರು ವಿವರವನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ. |
| (ಇ) | ರಾಜ್ಯದಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ವಸತಿ ಯೋಜನೆಗಳು ಯಾವುವು ; ಇವುಗಳಿಗೆನಿಗದಿಪಡಿಸಿರುವ | ರಾಜ್ಯದಲ್ಲಿ ವಸತಿ ರಹಿತರುಗಳಿಗೆ ವಸತಿ ಒದಗಿಸಲು ಈ ಕೆಳಕಂಡ ಯೋಜನೆಗಳು ಚಾಲ್ತಿಯಲ್ಲಿವೆ.<br><br>1. ಬಸವ ವಸತಿ ಯೋಜನೆ |

ಸಹಾಯ ಧನವೆಷ್ಟು ಹಾಗೂ ಮಂಜೂರು ಮಾಡಲು ಅನುಸರಿಸುವ ಮಾನದಂಡಗಳೇನು (ಸಂಪೂರ್ಣ ವಿವರ ನೀಡುವುದು) ?

2. ಡಾ|| ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ ಹಾಗೂ ನಗರ)
3. ದೇವರಾಜು ಅರಸು ಯೋಜನೆ (ಗ್ರಾಮೀಣ ಹಾಗೂ ನಗರ)
4. ವಾಜಪೇಯಿ ನಗರ ವಸತಿ ಯೋಜನೆ
5. ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) (ಕೇಂದ್ರ ಸರ್ಕಾರ ಪುರಸ್ಕೃತ)
6. ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) (ಕೇಂದ್ರ ಸರ್ಕಾರ ಪುರಸ್ಕೃತ)
7. ಮುಖ್ಯಮಂತ್ರಿಗಳ ಒಂದು ಲಕ್ಷ ಬೆಂಗಳೂರು ಬಹು ಮಹಡಿ ಯೋಜನೆ.

ರಾಜ್ಯದಲ್ಲಿ ಚಾಲ್ತಿಯಲ್ಲಿರುವ ವಿವಿಧ ವಸತಿ ಯೋಜನೆಗಳ ಸಹಾಧನದ ವಿವರ ಈ ಕೆಳಗಿನಂತಿದೆ.

| ಯೋಜನೆ | ಘಟಕ ವೆಚ್ಚ | |
|---|---|---|
| | ಪ.ಜಾ/ಪ. ವರ್ಗ | ಸಾಮಾನ್ಯ |
| ಬಸವ ವಸತಿ ಯೋಜನೆ | - | 1,20,000 |
| ಡಾ||ಬಿ.ಆರ್ ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ) | 1,75,000 | - |
| ಡಾ|| ಬಿ.ಆರ್ ಅಂಬೇಡ್ಕರ್ ನಿವಾಸ್ ಯೋಜನೆ (ನಗರ) | 2,00,000 | - |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 1,50,000 | 1,20,000 |
| ದೇವರಾಜ ಅರಸು ವಸತಿ ಯೋಜನೆ (ಗ್ರಾಮೀಣ & ನಗರ) | 1,50,000 | 1,20,000 |
| ವಾಜಪೇಯಿ ನಗರ ವಸತಿ ಯೋಜನೆ | - | 1,20,000 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ ನಗರ | 1,50,000 | 1,50,000 |

ವಿವಿಧ ವಸತಿ ಯೋಜನೆಗಳಡಿಯಲ್ಲಿ ಮನೆಗಳನ್ನು ಮಂಜೂರು ಮಾಡಲು ಅನುಸರಿಸಬೇಕಾದ ಮಾನದಂಡಗಳನ್ನು ಮತ್ತು ಪ್ರಧಾನ ಮಂತ್ರಿ ಆವಸ್ ಯೋಜನೆ (ನಗರ)ರಡಿ ಫಲಾನುಭವಿಗಳನ್ನು ಗುರುತಿಸಲು/ ಆಯ್ಕೆ ಮಾಡುವ ಮಾನದಂಡಗಳನ್ನು ಅನುಬಂಧ-2 ರಲ್ಲಿ ಒದಗಿಸಲಾಗಿದೆ.

ಸಂಖ್ಯೆ :ವಇ 437 ಹೆಚ್ಎಂ 2020

**(ವಿ. ಸೋಮಣ್ಣ)**
ವಸತಿ ಸಚಿವರು

Annexure-1

12

LAQ-1249

| District | Constituency | Selection | Complete | Foundation | Lintel | Roof | Progress | Unstarted | Block |
|---|---|---|---|---|---|---|---|---|---|
| Chamarajanagar | Chamarajanagar | 4903 | 2138 | 682 | 278 | 525 | 1485 | 759 | 521 |
| Chamarajanagar | Gundlupet | 4944 | 2042 | 698 | 272 | 536 | 1506 | 852 | 544 |
| Chamarajanagar | Hanur | 5460 | 2064 | 1120 | 487 | 775 | 2382 | 374 | 640 |
| Chamarajanagar | Kollegal | 1120 | 232 | 62 | 60 | 293 | 415 | 317 | 156 |
| Chamarajanagar | Kollegal (SC) | 3769 | 1455 | 728 | 223 | 367 | 1318 | 490 | 506 |
| | | **20196** | **7931** | **3290** | **1320** | **2496** | **7106** | **2792** | **2367** |

## ಅನುಬಂಧ-2

**ವಿವಿಧ ವಸತಿ ಯೋಜನೆಗಳಡಿಯಲ್ಲಿ ಮನೆಗಳನ್ನು ಮಂಜೂರು ಮಾಡಲು ಅನುಸರಿಸಬೇಕಾದ ಮಾನದಂಡಗಗಳ ವಿವರಗಳು.**

- ಅರ್ಜಿದಾರರು ಕಡ್ಡಾಯವಾಗಿ ಮಹಿಳೆಯಾಗಿರಬೇಕು (ವಿವಾಹಿತಿ ಅಥವಾ ಏಕ ಮಹಿಳಾ ಒಡೆತನದ ಗೃಹಿಣಿ). ಮಾಜಿ ಯೋಧರು, ವಿಧುರರು, ಅಂಗವಿಕಲರು ಮತ್ತು ಹಿರಿಯ ನಾಗರೀಕರಾಗಿದ್ದಲ್ಲಿ ಪುರುಷರು ಸಹಾ ಅರ್ಹರಾಗಿರುತ್ತಾರೆ.
- 2018 ನೇ ಸಾಲಿನ ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಗುರುತಿಸಲಾದ ವಸತಿ ರಹಿತರ ಸಮೀಕ್ಷೆಯ ಪಟ್ಟಿಯಲ್ಲಿದ್ದು, ಸ್ವಂತ ನಿವೇಶನ ಹೊಂದಿರಬೇಕು.
- ಅರ್ಜಿದಾರರ ಕುಂಟುಂಬವು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದಿದ್ದು, ವಾರ್ಷಿಕ ಆದಾಯವು ಗ್ರಾಮೀಣ ಪ್ರದೇಶದವರಾಗಿದಲ್ಲಿ ರೂ. 32000/- ಕ್ಕಿಂತ ಕಡಿಮೆ ಇರಬೇಕು ನಗರ ಪ್ರದೇಶದಲ್ಲಿ ರೂ.87,600/-ರ ಒಳಗಿರಬೇಕು.
- ಅರ್ಜಿದಾರರ ಕುಟುಂಬವು ವಸತಿ ರಹಿತರಾಗಿದ್ದು, ಅರ್ಜಿದಾರರು ಅಥವಾ ಕುಂಟುಬದ ಯಾವುದೇ ಸದ್ಯಸರ ಹೆಸರಿನಲ್ಲಿ ಕರ್ನಾಟಕದ ಯಾವುದೇ ಭಾಗದಲ್ಲಿ ಸ್ವಂತ ಮನೆಯನ್ನು ಹೊಂದಿರಬಾರದು. ಶಿಥಿಲಗೊಂಡ ಮನೆ ಅಥವಾ ಗುಡಿಸಲಿನಲ್ಲಿ ವಾಸಿಸುತ್ತಿರುವವರು ಅರ್ಹರಾಗಿರುತ್ತಾರೆ.
- ಅರ್ಜಿದಾರರು ಸ್ವಂತ ನಿವೇಶನ ಹೊಂದಿದ್ದು ನಿವೇಶನಕ್ಕೆ ಸಂಬಂಧಿಸಿದಂತೆ ಖಾತೆ ಹೊಂದಿರಬೇಕು (ಪಾರಂಪರಿಕ ಅರಣ್ಯ ಹಕ್ಕುಗಳ ಕಾಯ್ದೆಯನ್ವಯ ಜಿಲ್ಲಾ ಸಮಿತಿಯಿಂದ ನೀಡಲಾದ ಹಕ್ಕುಪತ್ರ ಪಡೆದಿದ್ದಲ್ಲಿ ವಸತಿ ಸೌಕರ್ಯ ಪಡೆಯಲು ಪರಿಗಣಿಸಬಹುದಾಗಿದೆ.)
- ಬೇರೆ ಯಾವುದೇ ಯೋಜನೆ/ ಇಲಾಖೆಯಿಂದ ಈಗಾಗಲೇ ವಸತಿ ಸೌಲಭ್ಯ ಪಡೆದಿರಬಾರದು.
- ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾ) ಯಡಿ ವಸತಿ ಸೌಲಭ್ಯ ಪಡೆಯಲು ಕೇಂದ್ರ ಸರ್ಕಾರದಿಂದ ನೀಡಲಾದ ಸಾಮಾಜಿಕ ಆರ್ಥಿಕ ಮತ್ತು ಜಾತಿ ಜನಗಣತಿ 2011 ರ ಪಟ್ಟಿಯಲ್ಲಿ ಹೆಸರು ಸೇರಿರಬೇಕು.
- ಡಾ||ಬಿ.ಆರ್.ಅಂಬೇಡ್ಕರ್ ಆವಾಸ್ ಯೋಜನೆಯಡಿ ವಸತಿ ಸೌಲಭ್ಯ ಪಡೆಯಲು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿರಬೇಕು. ಈ ವರ್ಗದ ವಸತಿ ರಹಿತರಿಗೆ ಬೇಡಿಕೆ ಆಧಾರಿತವಾಗಿ ವಸತಿ ಕಲ್ಪಿಸಲಾಗುವುದು.

**ಪ್ರಧಾನ ಮಂತ್ರಿ ಆವಸ್ ಯೋಜನೆ (ನಗರ)ರಡಿ ಫಲಾನುಭವಿಗಳನ್ನು ಗುರುತಿಸಲು/ ಆಯ್ಕೆ ಮಾಡುವ ಮಾನದಂಡಗಳ ವಿವರಗಳು.**

- ಫಲಾನುಭವಿಯು ಬೇಡಿಕೆ ಸಮೀಕ್ಷೆಯಲ್ಲಿರಬೇಕು.
- ದೇಶದಾದ್ಯಂತ ಅವನ / ಅವಳ ಹೆಸರಿನಲ್ಲಿ ಯಾವುದೇ ಪಕ್ಕಾ ಮನೆ ಇರಬಾರದು.
- ವಾರ್ಷಿಕ ಆಧಾಯ 3 ಲಕ್ಷಕ್ಕಿಂತ ಕಡಿಮೆ ಇರಬೇಕು.
- ಇತರೇ ವಸತಿ ಯೋಜನೆಗಳಲ್ಲಿ ಈಗಾಗಲೇ ಸಹಾಯಧನ ಪಡೆದಿರಬಾರದು.
- ಫಲಾನುಭವಿಯು ಸ್ವಂತ ನಿವೇಶನ ಹೊಂದಿರಬೇಕು.



**ಕರ್ನಾಟಕ ಸರ್ಕಾರ**

ಸಂಖ್ಯೆ: ವಇ 186 ಹೆಚ್‌ಎಫ್‌ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 22.01.2021

**ಇಂದ**:
ಸರ್ಕಾರದ ಕಾರ್ಯದರ್ಶಿಯವರು,
ವಸತಿ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆಯ ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ**: ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ರಘುಮೂರ್ತಿ.ಟಿ. (ಚಳ್ಳಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1197 ಕ್ಕೆ ಉತ್ತರ ಒದಗಿಸುವ ಬಗ್ಗೆ.

**ಉಲ್ಲೇಖ:** ಕಾರ್ಯದರ್ಶಿ (ಪ್ರ), ಕರ್ನಾಟಕ ವಿಧಾನ ಸಭೆ ಸಚಿವಾಲಯ ಇವರ ಅ.ಸ ಪತ್ರ ಸಂಖ್ಯೆ: ವಿಸಪ್ರಶಾ/15ನೇವಿಸ/8ಅ/ಚುಗು-ಚುರ.ಪ್ರಶ್ನೆ/06/2020, ದಿನಾಂಕ: 08.12.2020

------

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ಸದಸ್ಯರಾದ ಶ್ರೀ ರಘುಮೂರ್ತಿ.ಟಿ.(ಚಳ್ಳಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1197 ಕ್ಕೆ ಸಂಬಂಧಿಸಿದ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಜಿ.ಲಕ್ಷ್ಮಣ)
ಸರ್ಕಾರದ ಅಧೀನ ಕಾರ್ಯದರ್ಶಿ-3,
ವಸತಿ ಇಲಾಖೆ.

22/1/21



# ಕರ್ನಾಟಕ ವಿಧಾನ ಸಭೆ

| | |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ರಘುಮೂರ್ತಿ. ಟಿ. (ಚಳ್ಳಕೆರೆ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1197 |
| ಉತ್ತರಿಸಬೇಕಾಗಿದ್ದ ದಿನಾಂಕ | 14.12.2020 |
| ಉತ್ತರಿಸುವ ಸಚಿವರು | ವಸತಿ ಸಚಿವರು |

| ಅನು ಕ್ರಮ | ಪ್ರಶ್ನೆ | ಉತ್ತರ |
|---|---|---|
| ಅ | ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ನಗರಕ್ಕೆ ಪ್ರಧಾನಮಂತ್ರಿಗಳ ಆವಾಸ ನಗರ ಹೌಸಿಂಗ್ ಆಲ್ 2022 ಅಫೋರ್ಡಬಲ್ ಹೌಸಿಂಗ್ ಪಾರ್ಟನರ್‌ಶಿಪ್ ಉಪಯೋಜನೆಯಡಿ 5250 ಮನೆಗಳು ಮಂಜೂರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ | ಬಂದಿದ್ದಲ್ಲಿ, ವಸತಿ ರಹಿತ ಜನರಿಗೆ ಮನೆಗಳನ್ನು ಹಂಚಿಕೆ ಮಾಡಲು ವಿಳಂಬವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಯಡಿಯಲ್ಲಿನ ಅಫೋರ್ಡಬಲ್ ಹೌಸಿಂಗ್ ಇನ್ ಪಾರ್ಟನರ್‌ಶಿಪ್ (ಎ.ಹೆಚ್.ಪಿ.) ಘಟಕದಡಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ನಗರದಲ್ಲಿ 5,250 ಮನೆಗಳನ್ನು ನಿರ್ಮಿಸುವ ಯೋಜನೆಗೆ ದಿನಾಂಕ: 30.10.2017 ರಂದು ಜರುಗಿದ ಕೇಂದ್ರ ಸರ್ಕಾರದ ಕೇಂದ್ರ ಮಂಜೂರಾತಿ ಮತ್ತು ಮೇಲ್ವಿಚಾರಣಾ ಸಮಿತಿ (ಸಿ.ಎಸ್.ಎಂ.ಸಿ.) ಸಭೆಯಲ್ಲಿ ನೀಡಿದ ಅನುಮೋದನೆಯ ನಂತರ ರಾಜ್ಯ ಸರ್ಕಾರವು ಈ ಯೋಜನೆಗೆ ಸರ್ಕಾರದ ಆದೇಶ ಸಂಖ್ಯೆ: ವಇ 86 ಹೆಚ್‌ಎಫ್‌ಎ 2018, ದಿನಾಂಕ: 04.02.2019 ರಲ್ಲಿ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.<br><br>ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಯಡಿಯಲ್ಲಿನ ಅಫೋರ್ಡಬಲ್ ಹೌಸಿಂಗ್ ಇನ್ ಪಾರ್ಟನರ್‌ಶಿಪ್ (ಎ.ಹೆಚ್.ಪಿ.) ಘಟಕದಡಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ನಗರಕ್ಕೆ ಮಂಜೂರಾಗಿದ್ದ 5,250 ಮನೆಗಳ ಪೈಕಿ ನಗರ ಸ್ಥಳೀಯ ಸಂಸ್ಥೆಯವರು 1,008 ಮನೆಗಳಿಗೆ ಸೀಮಿತಗೊಳಿಸಿ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಈ ಪ್ರಸ್ತಾವನೆಗೆ ದಿನಾಂಕ: 27.07.2020 ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯ ಮಟ್ಟದ ಅನುಮೋದನಾ ಮತ್ತು ಮೇಲ್ವಿಚಾರಣಾ ಸಮಿತಿಯ (ಎಸ್.ಎಲ್.ಎಸ್.ಎಂ.ಸಿ.) 23ನೇ ಸಭೆಯಲ್ಲಿ ಮತ್ತು ದಿನಾಂಕ: 09.09.2020 ರಂದು ನವದೆಹಲಿಯಲ್ಲಿ ನಡೆದ ಸಿ.ಎಸ್.ಎಂ.ಸಿ.ಯ 51ನೇ ಸಭೆಯಲ್ಲಿ ಅನುಮೋದನೆಯನ್ನು ನೀಡಲಾಗಿದೆ.<br><br>ಅದರಂತೆ, ಸರ್ಕಾರದ ಆದೇಶ ಸಂಖ್ಯೆ: ವಇ 136 ಹೆಚ್‌ಎಫ್‌ಎ 2020, ದಿನಾಂಕ: 07.11.2020 ರಲ್ಲಿ ಸರ್ಕಾರದ |
| ಇ | ಹಾಗಿದ್ದಲ್ಲಿ, ಸದರಿ ನಗರದ ವಸತಿ ರಹಿತರಿಗೆ ಮನೆಗಳನ್ನು ಹಂಚಿಕೆ ಮಾಡಲು ಸರ್ಕಾರವು ಕೈಗೊಳ್ಳುವ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು) | |

| | | |
|---|---|---|
| | | ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. ಅದರಂತೆ, ಚಳ್ಳಕೆರೆ ನಗರದಲ್ಲಿ 1,008 ಮನೆಗಳ ನಿರ್ಮಾಣ ಕಾಮಗಾರಿಗಾಗಿ ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತದಿಂದ ದಿನಾಂಕ: 25.11.2020 ರಂದು ಟೆಂಡರ್ ಆಹ್ವಾನಿಸಲಾಗಿದೆ. ಸದರಿ ಟೆಂಡರನ್ನು ಪರಿಶೀಲಿಸಿ, ಸದರಿ ನಿಗಮವು ನಿಯಮಾನುಸಾರ ಮುಂದಿನ ಅಗತ್ಯ ಕ್ರಮ ವಹಿಸುವುದು. |
| ಈ (i) | ಸದರಿ ಮನೆಗಳ ಹಂಚಿಕೆ ಪ್ರಕ್ರಿಯೆಗೆ ಅನುಸರಿಸಲಾಗಿರುವ ಮಾನದಂಡವೇನು. ಮತ್ತು ಯಾವಾಗ ಹಂಚಿಕೆ ಮಾಡಲಾಗುವುದು; (ವಿವರ ನೀಡುವುದು) | ಮನೆಗಳ ಹಂಚಿಕೆಗೆ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುತ್ತಿದೆ:-<br><br>1. ಮಹಿಳಾ ಫಲಾನುಭವಿಗಳಿಗೆ ಮೊದಲ ಆದ್ಯತೆ. ವಿಧವೆ / ವಿಧುರ / ವಿಕಲಚೇತನ / ಮಾಜಿ ಸೈನಿಕರು / ಸ್ವಾತಂತ್ರ್ಯ ಹೋರಾಟಗಾರರು / ವಿಶೇಷ ವರ್ಗದವರು ಅಗತ್ಯ ಪ್ರಮಾಣ ಪತ್ರ ಸಲ್ಲಿಸುವುದು;<br><br>2. ಫಲಾನುಭವಿಯ ಆಧಾರ್ ಕಾರ್ಡ್, ಪಡಿತರ ಚೀಟಿ, ಚುನಾವಣಾ ಗುರುತಿನ ಚೀಟಿ ಮತ್ತಿತರ ಎಲ್ಲಾ ದಾಖಲಾತಿಗಳು ನಗರ ಪ್ರದೇಶದ ವ್ಯಾಪ್ತಿಯಲ್ಲಿರಬೇಕು;<br><br>3. ಫಲಾನುಭವಿಯ ಹಾಗೂ ಕುಟುಂಬದ ಸದಸ್ಯರ ಹೆಸರಿನಲ್ಲಿ ನಗರದ ಅಥವಾ ದೇಶದ ಯಾವುದೇ ಭಾಗದಲ್ಲಿ ಸ್ವಂತ ನಿವೇಶನ / ಮನೆಯನ್ನು ಹೊಂದಿರಬಾರದು;<br><br>4. ಫಲಾನುಭವಿಯು ನಿಗದಿಪಡಿಸಿದ ವಂತಿಕೆಯನ್ನು ಭರಿಸಲು ಸಿದ್ಧವಿರಬೇಕು. ಈ ಕುರಿತು ನಗರ ಸ್ಥಳೀಯ ಸಂಸ್ಥೆಗೆ ಮುಚ್ಚಳಿಕೆ ಪತ್ರ ಬರೆದುಕೊಡಬೇಕು;<br><br>5. ಫಲಾನುಭವಿಯು ನಗರ ಸ್ಥಳೀಯ ಸಂಸ್ಥೆಯು ಸೂಚಿಸಿದ ಬ್ಯಾಂಕ್‌ನಲ್ಲಿ ವೈಯಕ್ತಿಕ ಉಳಿತಾಯ ಖಾತೆಯನ್ನು ತೆರೆದು, ಮುಂಗಡವಾಗಿ ರೂ. 10,000/- (ಹತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಠೇವಣಿ ಮಾಡಬೇಕು;<br><br>6. ಫಲಾನುಭವಿಯ ವೈಯಕ್ತಿಕ ಕಡತ, ಯೋಜನೆಯ ತಂತ್ರಾಂಶದಲ್ಲಿ ಕಾಲೋಚಿತಗೊಳಿಸಲು ಹಾಗೂ ಬ್ಯಾಂಕ್ ಖಾತೆ ತೆರೆಯಲು ಈ ಕೆಳಕಂಡ ದಾಖಲೆಗಳನ್ನು ಕಡ್ಡಾಯವಾಗಿ ಹಾಜರುಪಡಿಸಬೇಕು:-<br><br>(1) ಆಧಾರ್ ಕಾರ್ಡ್ (ಗಂಡ, ಹೆಂಡತಿ ಮತ್ತು ಮಕ್ಕಳ ಆಧಾರ್ ಕಾರ್ಡ್ ನಕಲು);<br><br>(2) ಜಾತಿ ಮತ್ತು ಆದಾಯ ಪ್ರಮಾಣ ಪತ್ರ (ಇತ್ತೀಚಿನದು, ನಕಲು);<br>(3) ಪಡಿತರ ಚೀಟಿ (ನಕಲು);<br><br>(4) ಪಾನ್ ಕಾರ್ಡ್ (ನಕಲು);<br><br>(5) ಚುನಾವಣಾ ಗುರುತಿನ ಚೀಟಿ (ನಕಲು); |

| | | |
|---|---|---|
| | | (6) ಬ್ಯಾಂಕ್ ಪಾಸ್ ಪುಸ್ತಕ (ನಕಲು);<br><br>(7) ದೂರವಾಣಿ ಸಂಖ್ಯೆ;<br><br>(8) ಫಲಾನುಭವಿಯ ಭಾವಚಿತ್ರ (ಪಾಸ್‌ಪೋರ್ಟ್ ಅಳತೆ);<br><br>(9) ಕುಟುಂಬದ ಭಾವಚಿತ್ರ (ಗ್ರೂಪ್ ಫೋಟೋ); ಹಾಗೂ<br><br>(10) ದೇಶದ ಎಲ್ಲೂ ಸ್ವಂತ ನಿವೇಶನ / ಮನೆ ಹೊಂದಿಲ್ಲವೆಂದು ಸ್ವಯಂ ಧೃಢೀಕರಣ ಪತ್ರ.<br><br>ಮನೆಗಳ ನಿರ್ಮಾಣ ಕಾಮಗಾರಿ ಪೂರ್ಣಗೊಂಡ ನಂತರ ಸಂಬಂಧಿಸಿದ ಫಲಾನುಭವಿಗಳಿಗೆ ಮನೆಗಳನ್ನು ಹಂಚಿಕೆ ಮಾಡಲಾಗುವುದು. |
| ಈ (ii) | ಕಳೆದ ಮೂರು ವರ್ಷಗಳಲ್ಲಿ ಚಳ್ಳಕೆರೆ ನಗರಕ್ಕೆ ಈ ಅಟಲ್ ಬಿಹಾರಿ ವಾಜಿಪೇಯಿ ವಸತಿ ಯೋಜನೆಯಡಿ ಹಂಚಿಕೆ ಮಾಡಿರುವ ಮನೆಗಳ ಸಂಖ್ಯೆ ಎಷ್ಟು; ಅದರಲ್ಲಿ ಪೂರ್ಣಗೊಂಡಿರುವ ಹಾಗೂ ಅಪೂರ್ಣಗೊಂಡಿರುವ ಮನೆಗಳ ಸಂಖ್ಯೆ ಎಷ್ಟು ಮತ್ತು ಯಾವಾಗ ಪೂರ್ಣಗೊಳಿಸಲಾಗುವುದು; | ಕಳೆದ ಮೂರು ವರ್ಷಗಳಲ್ಲಿ ಚಳ್ಳಕೆರೆ ನಗರಕ್ಕೆ ವಾಜಪೇಯಿ ನಗರ ವಸತಿ ಯೋಜನೆಯಡಿ ಒಟ್ಟು 53 ಮನೆಗಳು ಮಂಜೂರಾಗಿದ್ದು, 30 ಮನೆಗಳು ಪೂರ್ಣಗೊಂಡಿರುತ್ತವೆ ಹಾಗೂ ಒಟ್ಟು 4 ಮನೆಗಳನ್ನು ಫಲಾನುಭವಿಗಳೇ ಸ್ವತಃ ನಿರ್ಮಿಸಿಕೊಳ್ಳುತ್ತಿದ್ದು, ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿರುತ್ತವೆ. ಉಳಿದಂತೆ 19 ಮನೆಗಳು ಬ್ಲಾಕ್ ಆಗಿರುತ್ತವೆ. |
| ಉ | ಕಳೆದ ಮೂರು ವರ್ಷಗಳಲ್ಲಿ ಈ ಕ್ಷೇತ್ರಕ್ಕೆ ಬಸವ ವಸತಿ ಯೋಜನೆಯಡಿ ಮಂಜೂರಾದ ಮನೆಗಳ ಸಂಖ್ಯೆ ಎಷ್ಟು ಅದರಲ್ಲಿ ಪೂರ್ಣಗೊಂಡಿರುವ ಹಾಗೂ ಅಪೂರ್ಣಗೊಂಡಿರುವ ಮನೆಗಳ ಸಂಖ್ಯೆ ಎಷ್ಟು; | 2017-18ನೇ ಸಾಲಿನಲ್ಲಿ ಚಳ್ಳಕೆರೆ ವಿಧಾನ ಸಭಾ ಕ್ಷೇತ್ರಕ್ಕೆ ಬಸವ ವಸತಿ ಯೋಜನೆಯಡಿ ಒಟ್ಟು 1,456 ಮನೆಗಳನ್ನು ಮಂಜೂರು ಮಾಡಿ ಕಾಮಗಾರಿ ಆದೇಶ ನೀಡಲಾಗಿರುತ್ತದೆ. ಈ ಮನೆಗಳ ಪೈಕಿ ಒಟ್ಟು 526 ಮನೆಗಳು ಪೂರ್ಣಗೊಂಡಿರುತ್ತವೆ ಹಾಗೂ ಒಟ್ಟು 531 ಮನೆಗಳು ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿರುತ್ತವೆ. ಇನ್ನುಳಿದ ಒಟ್ಟು 399 ಮನೆಗಳು ಬ್ಲಾಕ್ ಆಗಿ, ರದ್ದಾಗಿರುತ್ತವೆ.<br><br>2018-19ನೇ ಸಾಲಿನಲ್ಲಿ ಚಳ್ಳಕೆರೆ ವಿಧಾನ ಸಭಾ ಕ್ಷೇತ್ರಕ್ಕೆ ಬಸವ ವಸತಿ ಯೋಜನೆಯಡಿ ಒಟ್ಟು 620 ಮನೆಗಳ ಗುರಿಯನ್ನು ನಿಗದಿಪಡಿಸಲಾಗಿರುತ್ತದೆ. ಸರ್ಕಾರದ ಆದೇಶ ಸಂಖ್ಯೆ: ವಇ 12 ಹೆಚ್‌ಎಹೆಚ್ 2020, ದಿನಾಂಕ: 19.05.2020 ರಲ್ಲಿ ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತದಿಂದ ಅನುಷ್ಠಾನಗೊಳಿಸುತ್ತಿರುವ ವಿವಿಧ ವಸತಿ ಯೋಜನೆಗಳಡಿ ಅಂದರೆ, ಬಸವ ವಸತಿ, ಡಾ: ಬಿ.ಆರ್. ಅಂಬೇಡ್ಕರ್ ನಿವಾಸ್ ಮತ್ತು ವಾಜಪೇಯಿ (ನಗರ) ವಸತಿ ಯೋಜನೆಗಳಡಿಯಲ್ಲಿ ಆಯ್ಕೆಯಾಗದ ಮತ್ತು ಆಯ್ಕೆಯಾಗಿ ವಿವಿಧ ಲಾಗಿನ್ ಹಂತದಲ್ಲಿರುವ ಹಾಗೂ ನಿಗದಿತ ಸಮಯದೊಳಗೆ ಮನೆ ಪ್ರಾರಂಭ ಮಾಡಿಕೊಳ್ಳದೇ ಬ್ಲಾಕ್ ಮಾಡಲಾದ ಮನೆಗಳನ್ನು ರದ್ದುಪಡಿಸುವಂತೆ ಆದೇಶಿಸಲಾಗಿದ್ದು, ಅದರಂತೆ ಸದರಿ ನಿಗಮದ ವತಿಯಿಂದ ಅಗತ್ಯ ಕ್ರಮ ವಹಿಸಲಾಗಿದೆ. |

| | | |
|---|---|---|
| | | 2019-20ನೇ ಸಾಲಿನಲ್ಲಿ ಬಸವ ವಸತಿ ಯೋಜನೆಯಡಿ ಯಾವುದೇ ಮನೆಗಳ ಗುರಿಯನ್ನು ನಿಗದಿಪಡಿಸಿರುವುದಿಲ್ಲ. |
| ಊ | ಅವುಗಳನ್ನು ಪೂರ್ಣಗೊಳಿಸಲು ಸರ್ಕಾರವು ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ರಾಜ್ಯದಲ್ಲಿ ಅನುಷ್ಠಾನಗೊಳಿಸುತ್ತಿರುವ ವಿವಿಧ ವಸತಿ ಯೋಜನೆಗಳ ಸಂಬಂಧದಲ್ಲಿ ರಾಜ್ಯ ಮಟ್ಟದ ಉಸ್ತುವಾರಿ ಸಂಸ್ಥೆಯಾದ ಹಾಗೂ ಮಾರ್ಗಸೂಚಿಯನ್ವಯ ಅನುಷ್ಠಾನ ಸಂಸ್ಥೆಯಾದ ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತದಿಂದ ಕಾಮಗಾರಿ ಆದೇಶ ನೀಡಿದ 90 ದಿನಗಳೊಳಗಾಗಿ ಫಲಾನುಭವಿಯು ಮನೆಯ ಕಾಮಗಾರಿಯನ್ನು ಪ್ರಾರಂಭಿಸಬೇಕಿದ್ದು, ಒಂದು ವರ್ಷದೊಳಗಾಗಿ ಮನೆಯನ್ನು ಪೂರ್ಣಗೊಳಿಸಬೇಕಾಗಿರುತ್ತದೆ. ಆದರೆ, ಫಲಾನುಭವಿಗಳೇ ಮನೆಗಳನ್ನು ಸ್ವತಃ ನಿರ್ಮಿಸಿಕೊಳ್ಳುತ್ತಿರುವುದರಿಂದ, ನಿಗದಿಪಡಿಸಿದ ಕಾಲಮಿತಿಯೊಳಗಾಗಿ ಮನೆಗಳನ್ನು ಪೂರ್ಣಗೊಳಿಸಲು ಸಂಬಂಧಿಸಿದ ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳ ಮುಖಾಂತರ ಹಿಂಬಾಲಿಕಾ (ಅನುಸರಣಾ) ಕ್ರಮ ಕೈಗೊಳ್ಳಲಾಗುತ್ತಿದೆ. |

[ಸಂಖ್ಯೆ: ವಇ 186 ಹೆಚ್ಎಫ್ಎ 2020]

(ವಿ. ಸೋಮಣ್ಣ)
ವಸತಿ ಸಚಿವರು.

**ಕರ್ನಾಟಕ ಸರ್ಕಾರ**

ಸಂಖ್ಯೆ: ಗ್ರಾಅಪ/902/ಗ್ರಾಪಂಅ/2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:29-01-2021.

**ಇಂದ,**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು (ಪಂ.ರಾಜ್)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ,
**ಬೆಂಗಳೂರು.**

**ಇವರಿಗೆ,**

ಕಾರ್ಯದರ್ಶಿಗಳು,
ವಿಧಾನ ಸಭೆ,
ವಿಧಾನ ಸೌಧ,
**ಬೆಂಗಳೂರು.**

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಶ್ರೀನಿವಾಸ್ ಎಂ. (ಮಂಡ್ಯ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1278 ಕ್ಕೆ ಉತ್ತರಿಸುವ ಬಗ್ಗೆ.

**ಉಲ್ಲೇಖ:** ಕಾರ್ಯದರ್ಶಿಗಳು, ಕರ್ನಾಟಕ ವಿಧಾನ ಸಭೆ ರವರ ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/8ಅ/ಪ್ರ.ಸಂ.1278/2020, ದಿನಾಂಕ: 05.12.2020.

*****

ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಶ್ರೀನಿವಾಸ್ ಎಂ. (ಮಂಡ್ಯ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1278 ಕ್ಕೆ ಸಂಬಂಧಿಸಿದಂತೆ ಉತ್ತರದ 10 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

Narayan 29/1/2021

(ಡಿ.ಜಿ. ನಾರಾಯಣ)
ಪೀಠಾಧಿಕಾರಿ (ಗ್ರಾಮ ಪಂಚಾಯಿತಿ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

29/1/2021

**ಪ್ರತಿ:**

ಸರ್ಕಾರದ ಅಧೀನ ಕಾರ್ಯದರ್ಶಿ (ಸಮನ್ವಯ) ಗ್ರಾಅಪ ಇಲಾಖೆ. (5 ಪ್ರತಿಗಳು)

Recd 29/01/2021

**ಕರ್ನಾಟಕ ವಿಧಾನ ಸಭೆ**

**15ನೇ ವಿಧಾನ ಸಭೆ 8ನೇ ಅಧಿವೇಶನ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1278
ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ ಎಂ. (ಮಂಡ್ಯ)
ಉತ್ತರಿಸುವ ದಿನಾಂಕ : 14-12-2020 (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯಿಂದ ವರ್ಗಾವಣೆ)
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಗ್ರಾಮ ಪಂಚಾಯತ್ ಮಟ್ಟದಲ್ಲಿ ಗ್ರಂಥಾಲಯ ಕಟ್ಟಡ ಲಭ್ಯವಿಲ್ಲದೆ ಜನಸಾಮಾನ್ಯರು ಸೌಲಭ್ಯಗಳಿಲ್ಲದೆ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಬಂದಿದೆ.<br><br>ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿ ಗ್ರಾಮ ಪಂಚಾಯತ್ ಮಟ್ಟದಲ್ಲಿ 650 ಸ್ವಂತ ಗ್ರಂಥಾಲಯ ಕಟ್ಟಡ ಲಭ್ಯವಿದ್ದು, ಉಳಿದ ಗ್ರಂಥಾಲಯಗಳು ಬಾಡಿಗೆ / ಖಾಸಗಿ ಕಟ್ಟಡದಲ್ಲಿ ಸಾರ್ವಜನಿಕ ಓದುಗರಿಗೆ ಗ್ರಂಥಾಲಯ ಸೇವೆಯನ್ನು ನೀಡುತ್ತಿರುತ್ತಿವೆ.<br><br>ಮಂಡ್ಯ ಜಿಲ್ಲೆಯಲ್ಲಿ ಒಟ್ಟು 231 ಗ್ರಾಮ ಪಂಚಾಯತಿ ಗ್ರಂಥಾಲಯಗಳಿದ್ದು, ಈ ಪೈಕಿ 143 ಗ್ರಾಮ ಪಂಚಾಯತಿ ಗ್ರಂಥಾಲಯಗಳಿಗೆ ಸ್ವಂತ ಕಟ್ಟಡಗಳಿದ್ದು, ಉಳಿದ 88 ಗ್ರಾಮ ಪಂಚಾಯತಿ ಗ್ರಂಥಾಲಯಗಳನ್ನು ಬಾಡಿಗೆ / ಖಾಸಗಿ ಕಟ್ಟಡದಲ್ಲಿ ನಡೆಸಲಾಗುತ್ತದೆ. |
| ಆ) | ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ನಿವೇಶನವಿದ್ದು ಕಟ್ಟಡವಿಲ್ಲದ ಗ್ರಾಮ ಪಂಚಾಯತಿ ಗ್ರಂಥಾಲಯಕ್ಕೆ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಒಗ್ಗೂಡಿಸುವಿಕೆ ಅನುದಾನದಲ್ಲಿ ಕಟ್ಟಡ ನಿರ್ಮಾಣ ಮಾಡಲು ಕ್ರಮ ಕೈಗೊಳ್ಳಲಾಗುವುದು. |
| ಇ) | ಮಂಡ್ಯ ವಿಧಾನಸಭಾ ಕ್ಷೇತ್ರದಲ್ಲಿನ ಗ್ರಾಮ ಪಂಚಾಯತ್ ಮಟ್ಟದಲ್ಲಿ ಇರುವ ಗ್ರಂಥಾಲಯಗಳೆಷ್ಟು? (ಸಂಪೂರ್ಣ ವಿವರ ನೀಡುವುದು) | ಮಂಡ್ಯ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ 24 ಗ್ರಾಮ ಪಂಚಾಯತಿ ಗ್ರಂಥಾಲಯಗಳು ಇರುತ್ತವೆ. ವಿವರಗಳನ್ನು ಅನುಬಂಧ-1 ರಲ್ಲಿ ನೀಡಿದೆ. |

ಸಂ. ಗ್ರಾಅಪ 902 ಗ್ರಾಪಂಅ 2020

**(ಕೆ.ಎಸ್. ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**

ANNEXURE - 1

# ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ. ಶ್ರೀನಿವಾಸ್ ಎಂ(ಮಂಡ್ಯ) ಕ್ಷೇತ್ರ ರವರ ಪ್ರಶ್ನೆ ಸಂ.1278ಕ್ಕೆ ಸಂಬಂಧಪಟ್ಟಂತೆ ಗ್ರಂಥಾಲಯಗಳ ಮಾಹಿತಿ

| ಕ್ರ. ಸಂ. | ವಿಧಾನಸಭಾ ಕ್ಷೇತ್ರ | ಗ್ರಾಮ ಪಂಚಾಯಿತಿ ಹೆಸರು | ಗ್ರಾಮ ಪಂಚಾಯಿತಿ ಗ್ರಂಥಾಲಯಗಳ ಸಂಖ್ಯೆ | ಗ್ರಂಥಾಲಯಗಳ ಸ್ವಂತ (ಗ್ರಾ.ಪಂ.) ಕಟ್ಟಡ/ ಬಾಡಿಗೆ ಕಟ್ಟಡ |
|---|---|---|---|---|
| 1 | ಮಂಡ್ಯ | ಆಲಕೆರೆ | 1 | ಸ್ವಂತ |
| 2 | | ಬಿ.ಗೌಡಗೆರೆ | 1 | ಗ್ರಾ.ಪಂ |
| 3 | | ಬಿ.ಹೊಸೂರು | 1 | ಇತರೆ |
| 4 | | ಬೇಬಿ | 1 | ಶಾಲಾ ಕಟ್ಟಡ ಬೇಬಿ |
| 5 | | ಬಸರಾಳು | 1 | ಬಾಡಿಗೆ |
| 6 | | ಬೂದನೂರು | 1 | ಸ್ವಂತ |
| 7 | | ಚಂದಗಾಲು(ಬ) | 1 | ಗ್ರಾ.ಪಂ ಕಟ್ಟಡ |
| 8 | | ದೊಡ್ಡಗರುಡನಹಳ್ಳಿ | 1 | (ಗ್ರಾ.ಪಂ.) ಕಟ್ಟಡ |
| 9 | | ಗೋಪಾಲಪುರ | 1 | ಬಾಡಿಗೆ |
| 10 | | ಹಲ್ಲೇಗೆರೆ | 1 | ಶಿಥಿಲ ಕಟ್ಟಡ |
| 11 | | ಹನಕೆರೆ | 1 | ಖಾಸಗಿ ಕಟ್ಟಡ |
| 12 | | ಹೊಡಾಘಟ್ಟ | 1 | ಗ್ರಾ.ಪಂ.ಕಟ್ಟಡ |
| 13 | | ಹುಲಿವಾನ | 1 | ಗ್ರಾಮ ಪಂಚಾಯಿತಿ ಕಟ್ಟಡ |
| 14 | | ಕಂಬದಹಳ್ಳಿ | 1 | ಸ್ವಂತ ಕಟಟ್ಟಡ |
| 15 | | ಕನ್ನಲಿ | 1 | ಗ್ರಾಮ ಪಂಚಾಯಿತಿ ಕಟ್ಟಡ |
| 16 | | ಕೀಲಾರ | 1 | ಸ್ವಂತ (ರಾಜೀವ್ ಗಾಂಧಿ ಸೇವಾ ಕೇಂದ್ರ) |
| 17 | | ಕೆರಗೋಡು | 1 | ಸ್ವಂತ |
| 18 | | ಮಂಡ್ಯ (ಗ್ರಾ) | 1 | ಬಾಡಿಗೆ ಸರ್ಕಾರಿ ಪಾಠ ಶಾಲೆ ಪಣಕನಹಳ್ಳಿ |
| 19 | | ಮಾರಗೌಡನಹಳ್ಳಿ | 1 | ಗ್ರಾಮ ಪಂಚಾಯತಿ ಹಳೆ ಕಟ್ಟಡ |
| 20 | | ಮುತ್ತೇಗೆರೆ | 1 | ಗ್ರಾಮ ಪಂಚಾಯಿತಿ ಕಟ್ಟಡ |
| 21 | | ಸಾತನೂರು | 1 | ಸರ್ಕಾರಿ ಶಾಲೆ |
| 22 | | ಶಿವಪುರ | 1 | ಗ್ರಾ.ಪಂ ಕಟ್ಟಡ |
| 23 | | ಉಮ್ಮಡಹಳ್ಳಿ | 1 | ಗ್ರಾಮ ಪಂಚಾಯಿತಿ ಕಟ್ಟಡ |
| 24 | | ಉಪ್ಪಾರಕನಹಳ್ಳಿ | 1 | ಕೃಷಿ ಇಲಾಖೆ ಕಟ್ಟಡ |

ಕಾರ್ಯನಿರ್ವಾಹಕ ಅಧಿಕಾರಿ,

ತಾಲ್ಲೂಕು ಪಂಚಾಯತ್, ಮಂಡ್ಯ.

**File No.DPAR-PRJ/32/2020-DO3-dparegovsec**

**ಕರ್ನಾಟಕ ಸರ್ಕಾರ**

ಸಂಖ್ಯೆ: ಸಿಆಸುಇ 32 ಪಿಆರ್‌ಜೆ 2020

ಕರ್ನಾಟಕ ಸರ್ಕಾರ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 03ನೇ ಫೆಬ್ರುವರಿ 2021

ಇವರಿಂದ
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಇ-ಆಡಳಿತ)

ಇವರಿಗೆ
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ:- ವಿಧಾನ ಸಭೆಯ ಸದಸ್ಯರಾದ ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 952ರ ಕುರಿತು.

ಉಲ್ಲೇಖ:- ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/8ಅ/ಪ್ರ.ಸಂ.952/2020, ದಿನಾಂಕ: 04.12.2020.

******

ಮೇಲ್ಕಂಡ ವಿಷಯ ಹಾಗೂ ಉಲ್ಲೇಖಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 952ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ಆರ್. ಶಾಂತಿ)
ಪೀಠಾಧಿಕಾರಿ-3
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಇ-ಆಡಳಿತ)

03/2/21

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 952

ಸದಸ್ಯರ ಹೆಸರು : ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ(ಕುಂದಾಪುರ)

ವಿಷಯ : ಆಧಾರ್ ಕಾರ್ಡ್

ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

ಉತ್ತರಿಸುವ ದಿನಾಂಕ : 14.12.2020

| ಕ್ರಮ ಸಂಖ್ಯೆ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಆಧಾರ್ ಕಾರ್ಡ್ ನೋಂದಣಿ ಮತ್ತು ತಿದ್ದುಪಡಿಗೆ ಜನರು ತಾಲ್ಲೂಕು ಕಛೇರಿ ಹಾಗೂ ಬ್ಯಾಂಕ್ ಗಳಿಗೆ ಅಲೆದಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಆಧಾರ್ ನೋಂದಣಿ / ತಿದ್ದುಪಡಿ ಸೇವೆಯ ಕೇಂದ್ರಗಳು ಕಡಿಮೆ ಇರುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಆ) | ಬಂದಿದ್ದಲ್ಲಿ ಪ್ರತಿ ಗ್ರಾಮ ಪಂಚಾಯಿತಿಗಳಲ್ಲಿ ಆಧಾರ್ ನೋಂದಣಿಗೆ ಅವಕಾಶ ಕಲ್ಪಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಎಲ್ಲಾ ಜಿಲ್ಲೆಗಳಲ್ಲಿ (ಬೆಂಗಳೂರು ಹೊರತು ಪಡಿಸಿ) ಹೆಚ್ಚುವರಿಯಾಗಿ ಆಧಾರ್ ಕೇಂದ್ರಗಳನ್ನು ಸ್ಥಾಪಿಸಲು ಮೆ\|\| ಕಾಮನ್ ಸರ್ವೀಸ್ ಸೆಂಟರ್ (CSC) SPV ರವರೊಂದಿಗೆ ಒಪ್ಪಂದವನ್ನು ಮಾಡಿಕೊಳ್ಳುವ ಪ್ರಕ್ರಿಯೆಯು ಚಾಲ್ತಿಯಲ್ಲಿದ್ದು, ಪ್ರಾಯೋಗಿಕ ಹಂತದಲ್ಲಿ ಪ್ರಾರಂಭಿಸಲು ಗ್ರಾಮೀಣಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಇಲಾಖೆಯಿಂದ ಕಾರ್ಯಾದೇಶ ನೀಡಿಲಾಗಿರುತ್ತದೆ. |

ಇ-ಕಡತ ಸಂಖ್ಯೆ: ಸಿಆಸುಇ 32 ಪಿಆರ್‌ಜೆ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿಗಳು

# ಕರ್ನಾಟಕ ಸರ್ಕಾರ

ಸಂಖ್ಯೆ: ವಇ 428 ಎಚ್‌ಎಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ.
ಬೆಂಗಳೂರು, ದಿನಾಂಕ:17.02.2021

ಇಂದ:

ಸರ್ಕಾರದ ಕಾರ್ಯದರ್ಶಿ,
ವಸತಿ ಇಲಾಖೆ
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಸುಬ್ಬಾರೆಡ್ಡಿ ಎ.ಎನ್, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1165ಕ್ಕೆ ಉತ್ತರ ನೀಡುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ, ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/8ಅ/ಪ್ರ.ಸಂ.1165/2020,ದಿನಾಂಕ:05.12.2020.

ಮಾನ್ಯ ವಿಧಾನ ಸಭೆ ಶ್ರೀ ಸುಬ್ಬಾರೆಡ್ಡಿ ಎ.ಎನ್, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1165ಕ್ಕೆ, ಮಾನ್ಯ ವಸತಿ ಸಚಿವರು ಉತ್ತರಿಸಿರುವ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

17/2

(ಮಾಳಪ್ಪ ವೈ ಕನ್ನೂರ)
ಶಾಖಾಧಿಕಾರಿ-2
ವಸತಿ ಇಲಾಖೆ.

Recd
17/02/2021

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಸುಬ್ಬಾರೆಡ್ಡಿ ಎಸ್. ಎನ್. (ಬಾಗೇಪಲ್ಲಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1165** |
| ಉತ್ತರಿಸಬೇಕಾದ ದಿನಾಂಕ | : | 14.12.2020 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ ಮೂರು ವರ್ಷಗಳಲ್ಲಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ವತಿಯಿಂದ ಫಲಾನುಭವಿಗಳ ಆಯ್ಕೆಯಾಗಿ ಅನುಮೋದನೆಗಾಗಿ ನಿಗಮಕ್ಕೆ ಸಲ್ಲಿಸಿರುವ ಮನೆಗಳ ಸಂಖ್ಯೆ ಎಷ್ಟು (ವರ್ಷವಾರು ಯೋಜನೆಗಳ ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಅಂದರೆ 2017-18 ನೇ ಸಾಲಿನಿಂದ 2019-20 ನೇ ಸಾಲಿನವರೆಗೆ ವಿವಿಧ ವಸತಿ ಯೋಜನೆಯಡಿಯಲ್ಲಿ ಅನುಷ್ಠಾನಾಧಿಕಾರಿಗಳು ಒಟ್ಟು 676331 ಫಲಾನುಭವಿಗಳನ್ನು ಆಯ್ಕೆ ಮಾಡಿ, ನಿಗಮದ ಅಂತಿಮ ಅನುಮೋದನೆಗೆ ಸಲ್ಲಿಸಿದ್ದು, ಸದರಿ ಫಲಾನುಭವಿಗಳ ಪೈಕಿ ಒಟ್ಟು 650444 ಫಲಾನುಭವಿಗಳಿಗೆ ನಿಗಮದಿಂದ ಅನುಮೋದನೆ ನೀಡಿ ಕಾಮಗಾರಿ ಆದೇಶ ನೀಡಲಾಗಿರುತ್ತದೆ.<br><br>ಇನ್ನುಳಿದ ಒಟ್ಟು 25887 ಫಲಾನುಭವಿಗಳ ಪಟ್ಟಿ ನಿಗಮದ ಲಾಗಿನ್‌ನಲ್ಲಿ ಅನುಮೋದನೆಗಾಗಿ ಬಾಕಿ ಇದ್ದು, ಸರ್ಕಾರದ ಆದೇಶ ಸಂಖ್ಯೆ : ವಇ 12 ಹೆಚ್‌ಎಹೆಚ್ 2020, ದಿನಾಂಕ :19.05.2020 ರನ್ವಯ ಬಸವ ವಸತಿ, ಡಾ\|\| ಬಿ.ಆರ್ ಅಂಬೇಡ್ಕರ್ ನಿವಾಸ್ ಮತ್ತು ವಾಜಪೇಯಿ ನಗರ ವಸತಿ ಯೋಜನೆಯಡಿಯಲ್ಲಿ ಆಯ್ಕೆಯಾಗದ ಮತ್ತು ಆಯ್ಕೆಯಾಗಿ ವಿವಿಧ ಲಾಗಿನ್ ಹಂತದಲ್ಲಿರುವ ಹಾಗೂ ನಿಗದಿತ ಸಮಯದೊಳಗೆ ಮನೆ ಪ್ರಾರಂಭ ಮಾಡಿಕೊಳ್ಳದೇ ಬ್ಲಾಕ್ ಮಾಡಲಾದ ಮನೆಗಳನ್ನು ರದ್ದುಪಡಿಸಲಾಗಿದೆ. ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) ಮತ್ತು ದೇವರಾಜ್ ಅರಸು ವಸತಿ ಯೋಜನೆಯಡಿ ಅನುಮೋದನೆ ಪ್ರಕ್ರಿಯೆ ಪ್ರಗತಿಯಲ್ಲಿದೆ.<br><br>ಯೋಜನಾವಾರು ಮತ್ತು ವರ್ಷವಾರು ವಿವರ ಈ ಕೆಳಕಂಡಂತಿವೆ. |

| ಯೋಜನೆ | ಶ್ರೇಣಿ | ನಿಗಮಕ್ಕೆ ಸಲ್ಲಿಸಿದ ಒಟ್ಟು ಫಲಾನುಭವಿಗಳ ಸಂಖ್ಯೆ | ನಿಗಮದಿಂದ ಅನುಮೋದನೆ ನೀಡಿದ ಫಲಾನುಭವಿಗಳ ಸಂಖ್ಯೆ | ನಿಗಮದ ಹಂತದಲ್ಲಿ ಅನುಮೋದನೆಗೆ ಬಾಕಿ ಇದ್ದ ಫಲಾನುಭವಿಗಳ ಸಂಖ್ಯೆ |
|---|---|---|---|---|
| ಬಸವ ವಸತಿ ಯೋಜನೆ | 2017-18 | 334172 | 333122 | 1050 |
| | 2018-19 | 3123 | 467 | 2656 |
| ಡಾ\|\| ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾ) | 2017-18 | 179355 | 161718 | 17637 |
| ಡಾ\|\| ಬಿ.ಆರ್. ಅಂಬೇಡ್ಕರ್ ನಿವಾಸ್ | 2017-18 | 12746 | 11656 | 1090 |

| | | | | |
|---|---|---|---|---|
| ಯೋಜನೆ (ನ) | | | | |
| ದೇವರಾಜ್ ಅರಸು ವಸತಿ ಯೋಜನೆ (ಗ್ರಾ & ನ) | 2017-18 | 17326 | 15025 | 2301 |
| | 2018-19 | 1250 | 1197 | 53 |
| | 2019-20 | 531 | 487 | 44 |
| ವಾಜಪೇಯಿ ನಗರ ವಸತಿ ಯೋಜನೆ | 2017-18 | 33095 | 32452 | 643 |
| | 2018-19 | 36 | 36 | 0 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾ) | 2017-18 | 54570 | 54570 | 0 |
| | 2019-20 | 40127 | 39714 | 413 |
| **ಒಟ್ಟು** | | **676331** | **650444** | **25887** |

| | | |
|---|---|---|
| (ಆ) | ಫಲಾನುಭವಿಗಳ ಆಯ್ಕೆಯಾದ ನಂತರ ಮಂಜೂರಾತಿ ತಡೆ ಹಿಡಿದಿರುವ ಕಾರಣ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ? | ನಿಗದಿತ ಸಮಯದಲ್ಲಿ ಕಾಮಗಾರಿಯನ್ನು ಪ್ರಾರಂಭ ಮಾಡಿಕೊಳ್ಳದ ಮನೆಗಳನ್ನು ಮಾರ್ಗಸೂಚಿಗಳನ್ವಯ ಬ್ಲಾಕ್ ಮಾಡಲಾಗಿತ್ತು. ಪ್ರಸ್ತುತ ಸರ್ಕಾರವು ಅಸ್ತಿತ್ವಕ್ಕೆ ಬಂದ ನಂತರ ಜನ ಪ್ರತಿನಿದಿಗಳ ಕೋರಿಕೆಯಂತೆ ಸರಕಾರವು ದಿನಾಂಕ: 14.02.2020 ರಂದು ಆದೇಶ ಹೊರಡಿಸಿ, ವಿವಿಧ ವಸತಿ ಯೋಜನೆಗಳಡಿ ನಿಗದಿತ ಸಮಯದಲ್ಲಿ ಪ್ರಾರಂಭಗೊಳ್ಳದೇ ಬ್ಲಾಕ್ ಆಗಿದ್ದ ಮನೆಗಳನ್ನು ತೆರವುಗೊಳಿಸಿ, ವಾಸ್ತವವಾಗಿ ಪ್ರಾರಂಭವಾಗಿರುವ ಮನೆಗಳ ಛಾಯಾ ಚಿತ್ರಗಳನ್ನು ಜಿಪಿಎಸ್ ಗೆ ಅಳವಡಿಸಲು ಒಂದೂವರೆ ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಜಿ.ಪಿ.ಎಸ್. ಮಾಡಿರುವ ಫಲಾನುಭವಿಗಳನ್ನು ಪ್ರಗತಿಗೆ ಪರಿಗಣಿಸಿ, ಸರ್ಕಾರದ ಆದೇಶದಂತೆ ಉಳಿದ ಮನೆಗಳನ್ನು ರದ್ದುಪಡಿಸಲಾಗಿದೆ.<br><br>ಶಾಶ್ವತವಾಗಿ ಹಿಂಪಡೆಯಲಾದ ಮನೆಗಳನ್ನು ಪುನ: ನೀಡುವ ಪ್ರಶ್ನೆ ಉದ್ಭವಿಸುವುದಿಲ್ಲ. |
| (ಇ) | ಬಂದಿದ್ದಲ್ಲಿ, ಕಾರಣಗಳೇನು ; | |
| (ಈ) | ಹಾಗಿದ್ದಲ್ಲಿ , ಮನೆಗಳನ್ನು ನಿರ್ಮಾಣ ಮಾಡಿಕೊಳ್ಳಲು ಅವಕಾಶ ನೀಡಿ ಹಣ ಬಿಡುಗಡೆ ಮಾಡಲಾಗುವುದೇ ? (ವಿವರ ನೀಡುವುದು) | |

ಸಂಖ್ಯೆ :ವಇ 428 ಹೆಚ್ಎಎಂ 2020

**(ವಿ. ಸೋಮಣ್ಣ)**
ವಸತಿ ಸಚಿವರು



**ಕರ್ನಾಟಕ ಸರ್ಕಾರ**

ಲೋಇ : e-68 : ಇಎಪಿ : 2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸಸೌಧ, 3ನೇ ಮಹಡಿ
ಡಾ:ಅಂಬೇಡ್ಕರ್ ವೀಧಿ, ಬೆಂಗಳೂರು
ಫೋನ್ ನಂ. 2203 4862/5113/4857
ದಿನಾಂಕ : 20-02-2021

ಇಂದ,
**ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,**
ಲೋಕೋಪಯೋಗಿ ಇಲಾಖೆ,
ಬೆಂಗಳೂರು.

ಇವರಿಗೆ,
**ಸರ್ಕಾರದ ಕಾರ್ಯದರ್ಶಿಗಳು,**
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ:-ವಿಧಾನ ಸಭಾ ಸದಸ್ಯರಾದ **ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ.1182 ಗೆ ಉತ್ತರ ಸಲ್ಲಿಸುವ ಬಗ್ಗೆ.**

ಉಲ್ಲೇಖ:-ತಮ್ಮ ಪತ್ರ ಸಂಖ್ಯೆ.ಪ್ರಶಾವಿಸ:15ನೇ ವಿಸ:8ನೇ ಅ:ಪ್ರ.ಸಂಖ್ಯೆ. 1182:2020 ದಿನಾಂಕ ದಿನಾಂಕ: 04-12-2020.

----

15 ನೇ ವಿಧಾನಸಭೆ 8ನೇ ಅಧಿವೇಶನದಲ್ಲಿ ಸೂಚಿಸಿರುವ **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ.1182** ಗೆ ಉತ್ತರಗಳನ್ನು 25 ಪ್ರತಿಗಳಲ್ಲಿ ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

20/02/2021
**(ರಾಮಚಂದ್ರಪ್ಪ ಕೆ.ಎನ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಬಾಹ್ಯ ಅನುದಾನಿತ ಯೋಜನೆಗಳು (ಇಎಪಿ)
ಲೋಕೋಪಯೋಗಿ ಇಲಾಖೆ

Received
20/2/21

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ**
**8ನೇ ಅಧಿವೇಶನ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1182 |
| ಮಾನ್ಯ ಸದಸ್ಯರ ಹೆಸರು | : | ಶ್ರೀ. ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| ಉತ್ತರಿಸುವ ದಿನಾಂಕ | : | 14-12-2020 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಇಲಾಖೆ |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಸವದತ್ತಿ ತಾಲ್ಲೂಕಿನ ಹೊಸೂರು ಗ್ರಾಮದ ಹತ್ತಿರವಿರುವ ಹಳ್ಳದ ಸೇತುವೆಯು ಸಂಪೂರ್ಣವಾಗಿ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಬಂದಿದೆ. |
| ಆ) | ಹಾಗಿದ್ದಲ್ಲಿ ಸದರಿ ಸೇತುವೆಯನ್ನು ನಿರ್ಮಾಣ ಮಾಡಲು ಎಷ್ಟು ಅನುದಾನದ ಅವಶ್ಯಕತೆಯಿರುವುದೆಂದು ಪ್ರಸ್ತಾವನೆ ಸಲ್ಲಿಸಲಾಗಿದೆ ಮತ್ತು ಪ್ರಸ್ತಾವನೆಯು ಯಾವ ಹಂತದಲ್ಲಿರುತ್ತದೆ? | ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ವತಿಯಿಂದ ಒಟ್ಟು 504 ಸೇತುವೆಗಳ ಪಟ್ಟಿಯನ್ನು ಅನುಮೋದನೆಗಾಗಿ ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿದ್ದು, ಸದರಿ ಪಟ್ಟಿಯಲ್ಲಿ ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಸವದತ್ತಿ ತಾಲ್ಲೂಕಿನ ಹೊಸೂರು ಗ್ರಾಮದ ಹತ್ತಿರವಿರುವ ಹಳ್ಳಕ್ಕೆ ಸೇತುವೆ ನಿರ್ಮಿಸುವ ಪ್ರಸ್ತಾವನೆಯು ಸೇರಿರುತ್ತದೆ. ಆರ್ಥಿಕ ಇಲಾಖೆಯು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಹಿಂಬರಹ ಸಂಖ್ಯೆ: FD 208 FC-2/2020, ದಿನಾಂಕ: 11-09-2020 ರಲ್ಲಿ ಈ ಕೆಳಗಿನಂತೆ ತಿಳಿಸಿರುತ್ತದೆ.<br><br>"The outstanding commitments of KRDCL are already being very high. Hence, Administrative Department is advised not to take up any new works till the previous works are completed and closed financially"<br><br>ಅದರಂತೆ, ಸದರಿ ಕಾಮಗಾರಿಯನ್ನು ಕೈಬಿಡಲಾಗಿದೆ. |

ಸಂಖ್ಯೆ: ಲೋಇ E-68 ಇಎಪಿ 2021

(ಗೋವಿಂದ ಎಂ. ಕಾರಜೋಳ)
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ಮಹದೇವ. ಕೆ. (ಪಿರಿಯಾಪಟ್ಟಣ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 461 |
| ಉತ್ತರಿಸಬೇಕಾಗಿದ್ದ ದಿನಾಂಕ | 14.12.2020 |
| ಉತ್ತರಿಸುವ ಸಚಿವರು | ವಸತಿ ಸಚಿವರು |

| ಅನು ಕ್ರಮ | ಪ್ರಶ್ನೆ | ಉತ್ತರ |
|---|---|---|
| ಅ | ಕೇಂದ್ರ ಸರ್ಕಾರದ ಪಿಎಂಎವೈ ಯೋಜನೆಯಡಿ ರಾಜ್ಯದಲ್ಲಿ ಎಷ್ಟು ಮನೆಗಳನ್ನು ಮಂಜೂರು ಮಾಡಲಾಗುತ್ತದೆ; ಹಾಗಿದ್ದಲ್ಲಿ ಪಿರಿಯಾಪಟ್ಟಣ ಮತ ಕ್ಷೇತ್ರಕ್ಕೆ ಎಷ್ಟು ಮನೆಗಳನ್ನು ಮಂಜೂರು ಮಾಡಲಾಗಿರುತ್ತದೆ; | ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) ಯಡಿಯಲ್ಲಿ ರಾಜ್ಯಕ್ಕೆ 2016-17ನೇ ಸಾಲಿನಿಂದ 2019-20ನೇ ಸಾಲಿನವರೆಗೆ 1,86,551 ಮನೆಗಳನ್ನು ಮಂಜೂರು ಮಾಡಲಾಗಿದೆ.<br><br>ಪಿರಿಯಾಪಟ್ಟಣ ವಿಧಾನಸಭಾ ಮತ ಕ್ಷೇತ್ರಕ್ಕೆ 573 ಮನೆಗಳನ್ನು ಮಂಜೂರು ಮಾಡಲಾಗಿದೆ.<br><br>ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಯಡಿಯಲ್ಲಿ ಕೇಂದ್ರ ಸರ್ಕಾರದಿಂದ ರಾಜ್ಯದ ಒಟ್ಟು 5,82,250 ಮನೆಗಳಿಗೆ ಅನುಮೋದನೆ ನೀಡಲಾಗಿದೆ.<br><br>ಸದರಿ ಯೋಜನೆಯಡಿ ಪಿರಿಯಾಪಟ್ಟಣ ಮತ ಕ್ಷೇತ್ರಕ್ಕೆ 2016-17ನೇ ಸಾಲಿನಿಂದ 2019-20ನೇ ಸಾಲಿನವರೆಗೆ 554 ಮನೆಗಳನ್ನು ಮಂಜೂರು ಮಾಡಲಾಗಿದೆ. |
| ಆ | ಈ ಪೈಕಿ ನಗರ ಪ್ರದೇಶ ಮತ್ತು ಗ್ರಾಮೀಣ ಪ್ರದೇಶಗಳಿಗೆ ಎಷ್ಟು ಮನೆಗಳನ್ನು ಮಂಜೂರು ಮಾಡಲಾಗಿರುತ್ತದೆ; (ಕಳೆದ ಮೂರು ವರ್ಷಗಳ ವಿವರ ನೀಡುವುದು) | ಪಿರಿಯಾಪಟ್ಟಣ ಮತ ಕ್ಷೇತ್ರಕ್ಕೆ ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) ಯಡಿಯಲ್ಲಿ ಈ ಕೆಳಕಂಡಂತೆ 573 ಮನೆಗಳನ್ನು ಮಂಜೂರು ಮಾಡಲಾಗಿದೆ:- |

| ವರ್ಷ | ವಿಧಾನಸಭಾ ಕ್ಷೇತ್ರ | ಮನೆಗಳ ಸಂಖ್ಯೆ |
|---|---|---|
| 2016-17 | ಪಿರಿಯಾಪಟ್ಟಣ | 250 |
| 2016-17ರ ಹೆಚ್ಚುವರಿ | | 49 |
| 2017-18 | | 180 |
| 2019-20 | | 94 |
| **ಒಟ್ಟು:** | | **573** |

ಪಿರಿಯಾಪಟ್ಟಣ ಮತ ಕ್ಷೇತ್ರಕ್ಕೆ ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಯಡಿಯಲ್ಲಿ ಈ ಕೆಳಕಂಡಂತೆ 554 ಮನೆಗಳನ್ನು ಮಂಜೂರು ಮಾಡಲಾಗಿದೆ:-

| ವರ್ಷ | ನಗರದ ಹೆಸರು | ಮನೆಗಳ ಸಂಖ್ಯೆ |
|---|---|---|
| 2016-17 | ಪಿರಿಯಾಪಟ್ಟಣ | 205 |
| 2017-18 | | 67 |

| | | | | |
|---|---|---|---|---|
| | | 2018-19 | | 81 |
| | | 2019-20 | | 201 |
| | | 2020-21 | | 00 |
| | | ಒಟ್ಟು: | | **554** |
| | | ಮೇಲಿನ 554 ಮನೆಗಳ ಪೈಕಿ ಕಳೆದ 3 ವರ್ಷಗಳಲ್ಲಿ ಮಂಜೂರಾದ ಒಟ್ಟು ಮನೆಗಳ ಸಂಖ್ಯೆಯು 282 ಆಗಿರುತ್ತದೆ. | | |
| ಇ | ಈ ಪಿಎಂಎವೈ ಯೋಜನೆಯಲ್ಲಿ ಮನೆಗಳಿಗೆ ಮಂಜೂರಾತಿ ಆದೇಶವನ್ನು ಯಾವಾಗ ನೀಡಲಾಗುವುದು? | ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) ಯಡಿಯಲ್ಲಿ ಆಯ್ಕೆಯಾಗಿ ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತದಿಂದ ಆನ್‌ಲೈನ್‌ನಲ್ಲಿ ಅನುಮೋದನೆಗೊಂಡ ಕೂಡಲೇ ಸಂಬಂಧಿಸಿದ ಗ್ರಾಮ ಪಂಚಾಯಿತಿಗಳ ವತಿಯಿಂದ ಫಲಾನುಭವಿಗಳಿಗೆ ಕಾಮಗಾರಿ ಆದೇಶವನ್ನು ನೀಡಲಾಗುತ್ತದೆ.<br><br>ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಯಡಿಯಲ್ಲಿ ಕೇಂದ್ರ ಸರ್ಕಾರದಿಂದ ಅನುಮೋದನೆಗೊಂಡ ತಕ್ಷಣ ಮಂಜೂರಾತಿ ಆದೇಶ ನೀಡುವಂತೆ ತಿಳಿಸಲಾಗುತ್ತಿದ್ದು, ಅದರಂತೆ ಸಂಬಂಧಿಸಿದ ನಗರ ಸ್ಥಳೀಯ ಸಂಸ್ಥೆಗಳಿಂದ ಮಂಜೂರಾತಿ ಆದೇಶವನ್ನು ನೀಡಲಾಗುತ್ತಿದೆ. | | |

[ಸಂಖ್ಯೆ: ವಇ 182 ಹೆಚ್‌ಎಫ್‌ಎ 2020]

(ವಿ. ಸೋಮಣ್ಣ)
ವಸತಿ ಸಚಿವರು.



**ಕರ್ನಾಟಕ ಸರ್ಕಾರ**

ಸಂಖ್ಯೆ: ವಇ 182 ಹೆಚ್‌ಎಫ್‌ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 22.01.2021

**ಇಂದ:**

ಸರ್ಕಾರದ ಕಾರ್ಯದರ್ಶಿಯವರು,
ವಸತಿ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆಯ ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಮಹದೇವ.ಕೆ. (ಪಿರಿಯಾಪಟ್ಟಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 461 ಕ್ಕೆ ಉತ್ತರ ಒದಗಿಸುವ ಬಗ್ಗೆ.

**ಉಲ್ಲೇಖ:** ಕಾರ್ಯದರ್ಶಿ (ಪ್ರ), ಕರ್ನಾಟಕ ವಿಧಾನ ಸಭೆ ಸಚಿವಾಲಯ ಇವರ ಅ.ಸ ಪತ್ರ ಸಂಖ್ಯೆ: ವಿಸಪ್ರಶಾ/15ನೇವಿಸ/8ಅ/ಚುಗು-ಚುರ.ಪ್ರಶ್ನೆ/06/2020, ದಿನಾಂಕ: 08.12.2020

------

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ಸದಸ್ಯರಾದ ಶ್ರೀ ಮಹದೇವ.ಕೆ. (ಪಿರಿಯಾಪಟ್ಟಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 461 ಕ್ಕೆ ಸಂಬಂಧಿಸಿದ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

22/1/21

ತಮ್ಮ ನಂಬುಗೆಯ,

(ಜಿ.ಲಕ್ಷ್ಮಣ)
ಸರ್ಕಾರದ ಅಧೀನ ಕಾರ್ಯದರ್ಶಿ-3,
ವಸತಿ ಇಲಾಖೆ.



ಕರ್ನಾಟಕ ಸರ್ಕಾರ

ಸಂಖ್ಯೆ: ಲೋಇ 111 ಸಿಕ್ಯೂಎನ್ 2020(ಇ)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:25.02.2021

ಇವರಿಂದ,
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಲೋಕೋಪಯೋಗಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ,
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಶಿವಶಂಕರ ರೆಡ್ಡಿ ಎನ್.ಹೆಚ್. (ಗೌರಿಬಿದನೂರು) ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1276ಕ್ಕೆ ಉತ್ತರಿಸುವ ಕುರಿತು.

ಉಲ್ಲೇಖ: ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/8ಅ/ಪ್ರಸಂ.1276/2020 ದಿ:05.12.2020.

********

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಶಿವಶಂಕರ ರೆಡ್ಡಿ ಎನ್.ಹೆಚ್. (ಗೌರಿಬಿದನೂರು) ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1276ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ ಹಾಗೂ ಸದರಿ ಉತ್ತರದ soft copy ಅನ್ನು dsqb-kla-kar@nic.in ಇ–ಮೇಲ್ ವಿಳಾಸಕ್ಕೆ ಕಳುಹಿಸಲಾಗಿದೆ ಎಂದು ತಮಗೆ ತಿಳಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಸಿದ್ದಪ್ಪ ಚಂದ್ರಶೇಖರ ಮರ್ತೂರ)
ಶಾಖಾಧಿಕಾರಿ
ಲೋಕೋಪಯೋಗಿ ಇಲಾಖೆ (ಸಂಪರ್ಕ–I).

03/3/21

# ಕರ್ನಾಟಕ ವಿಧಾನ ಸಭೆ

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1276
ಸದಸ್ಯರ ಹೆಸರು ಶ್ರೀ ಎನ್.ಹೆಚ್.ಶಿವಶಂಕರರೆಡ್ಡಿ, (ಗೌರೀಬಿದನೂರು)
ಉತ್ತರಿಸುವ ದಿನಾಂಕ: 14-12-2020
ಉತ್ತರಿಸುವ ಸಚಿವರು: ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ

| ಕ್ರಮ ಸಂಖ್ಯೆ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಜಿಲ್ಲಾ ಪಂಚಾಯ್ತಿಗಳ ರಸ್ತೆಗಳನ್ನು ಪಿಬ್ಲ್ಯೂಡಿ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಸರ್ಕಾರ ಪ್ರಕಟಣೆ ಮಾಡಿರುವುದು ನಿಜವೇ; | ಹೌದು. |
| ಆ) | ಗೌರಿಬಿದನೂರು ತಾಲ್ಲೂಕಿನಲ್ಲಿ ಯಾವ ಯಾವ ರಸ್ತೆಗಳನ್ನು ಮೇಲ್ದರ್ಜೆಗೇರಿಸಲಾಗಿದೆ (ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಲೋಇ 85/3 ಇಎಪಿ 2020 ದಿನಾಂಕ: 1-9-2020 ರಲ್ಲಿ ಗೌರಿಬಿದನೂರು ತಾಲ್ಲೂಕಿನಲ್ಲಿ 77 ಕಿ.ಮೀ. ಉದ್ದದ ರಸ್ತೆಗಳನ್ನು ಮೇಲ್ದರ್ಜೆಗೇರಿಸಲಾಗಿದೆ. ವಿವರಗಳನ್ನು ಅನುಬಂಧದಲ್ಲಿ ನೀಡಿದೆ. |
| ಇ) | ಈ ರಸ್ತೆಗಳನ್ನು ಅಭಿವೃದ್ಧಿ ಮಾಡಲು ಯಾವಾಗ ಯೋಜನೆ ರೂಪಿಸಲಾಗುವುದು? (ವಿವರ ನೀಡುವುದು) | ಸದರಿ ರಸ್ತೆಗಳು ಜಿಲ್ಲಾ ಪಂಚಾಯತ್ ರಸ್ತೆಗಳಾಗಿರುವುದರಿಂದ ಸದರಿ ಇಲಾಖೆಯಿಂದ ಹಸ್ತಾಂತರ ಪ್ರಕ್ರಿಯೆ ಪೂರ್ಣಗೊಂಡ ನಂತರ ಇಲಾಖೆಯಲ್ಲಿ ಲಭ್ಯವಿರುವ ಅನುದಾನ ಲಭ್ಯತೆಯನುಸಾರ ಅಭಿವೃದ್ಧಿಪಡಿಸಲು ಯೋಜನೆ ರೂಪಿಸಲಾಗುವುದು. |

ಲೋಇ III ಪಿಕ್ಯೂಎನ್ 2020(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

ಅನುಬಂಧ

**ವಿಧಾನಸಭೆಯ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1276ರ ಲಗತ್ತು ಅನುಬಂಧ-1**

**ಗೌರಿಬಿದನೂರು ತಾಲ್ಲೂಕಿನಲ್ಲಿ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲಾದ ರಸ್ತೆಗಳ ವಿವರ**

| ಕ್ರ. ಸಂ. | ಗ್ರಾಮೀಣ ರಸ್ತೆಯ ಹೆಸರು | ರಸ್ತೆಯ ಉದ್ದ (ಕಿ.ಮೀ) |
|---|---|---|
| 1 | ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕಿನಲ್ಲಿ ರಾಷ್ಟ್ರೀಯ ಹೆದ್ದಾರಿ-234 ರಿಂದ ರಾಜ್ಯ ಹೆದ್ದಾರಿ-94 ಸೇರುವ ಹಕ್ಕಿಪಿಕ್ಕಿ ಕಾಲೋನಿ, ಹೊಸೂರು, ಸೊನಗನಹಳ್ಳಿ, ಮಾಚೇನಹಳ್ಳಿ ಮಾರ್ಗದ ರಸ್ತೆ | 19.00 |
| 2 | ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕಿನಲ್ಲಿ ರಾಜ್ಯ ಹೆದ್ದಾರಿ-9 ದೊಡ್ಡಹನುಮೇನಹಳ್ಳಿ ಕ್ರಾಸ್‌ನಿಂದ ಘಾಟಿ ಸುಬ್ರಹ್ಮಣ್ಯದವರೆಗೆ ಚಿಕ್ಕಹುಸೇನ್‌ಪುರ, ತೊಂಡೆಬಾವಿ, ಚಿಕ್ಕಹೊಸಹಳ್ಳಿ ಮಾರ್ಗದ ರಸ್ತೆ | 16.50 |
| 3 | ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕಿನಲ್ಲಿ ರಾಜ್ಯ ಹೆದ್ದಾರಿ-9 ಬೈಪಾಸ್‌ನಿಂದ ಹುಣೇಸನಹಳ್ಳಿವರೆಗೆ ಡಿ.ಪಾಳ್ಯ, ನರಸಾಪುರ, ದೇವಗನಹಳ್ಳಿ, ಜಗರೆಡ್ಡಿಹಳ್ಳಿ ಮಾರ್ಗದ ರಸ್ತೆ | 29.00 |
| 4 | ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕಿನಲ್ಲಿ ರಾಜ್ಯ ಹೆದ್ದಾರಿ-94 ರಿಂದ ಆಂದ್ರಪ್ರದೇಶ ಗಡಿಯವರೆಗೆ ಕೃಷ್ಣರಾಜಪುರ, ಕೋಡಿಹಳ್ಳಿ, ಚೋಳಶೆಟ್ಟಿಹಳ್ಳಿ, ಯಲ್ಲೋಡು, ಬುಳ್ಳಸಂದ್ರ ಮಾರ್ಗದ ರಸ್ತೆ | 12.50 |
| | **ಗೌರಿಬಿದನೂರು ತಾಲ್ಲೂಕಿನ ಒಟ್ಟು** | **77.00** |

ಪ್ರಧಾನ ಇಂಜಿನಿಯರ್,
ಯೋಜನೆ ಮತ್ತು ರಸ್ತೆಗಳ ಆಸ್ತಿ ನಿರ್ವಹಣಾ ಕೇಂದ್ರ,
ಲೋಕೋಪಯೋಗಿ ಇಲಾಖೆ, ಬೆಂಗಳೂರು.

**UNSTARRED QUESTION-1323**

ಕರ್ನಾಟಕ ಸರ್ಕಾರ

ಸಂಖ್ಯೆ:AGRI-AML/232/2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ: 21-06-2021

ಇವರಿಂದ
ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಗಳು,
ಕೃಷಿ ಇಲಾಖೆ, ಬಹುಮಹಡಿ ಕಟ್ಟಡ,
ಬೆಂಗಳೂರು.

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1323 ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ಅಸಪ.ಸಂಖ್ಯೆ:ವಿಸಪ್ರಶಾ/15ನೇವಿಸ/8ಅ/ಪ್ರ.ಸಂ.1323/2020, ದಿನಾಂಕ:07-12-2020.

******

ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1323ಕ್ಕೆ ಉತ್ತರದ ಪ್ರತಿಯನ್ನು e-mail ID questionnsklc@karnataka.gov.in ಗೆ ಮೇಲ್ ಕಳುಹಿಸಲಾಗಿದೆ. ಸದರಿ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,
21/6/2021
(ಮಂಜುಳ ಬಿ.ಆರ್)
ಶಾಖಾಧಿಕಾರಿ
ಕೃಷಿಇಲಾಖೆ (ಯೋಜನೆ-ಎ)

R-D: 22/6/21

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1323 |
| ಸದಸ್ಯರ ಹೆಸರು | ಶ್ರೀ. ಶಿವಾನಂದ ಎಸ್.ಪಾಟೀಲ್ (ಬಸವನಬಾಗೇವಾಡಿ) |
| ಉತ್ತರಿಸುವ ದಿನಾಂಕ | 14-12-2020 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಕೃಷಿ ಇಲಾಖೆಯಿಂದ ಕೃಷಿಭಾಗ್ಯ ಯೋಜನೆ ಅಡಿಯಲ್ಲಿ ಕೃಷಿ ಹೊಂಡಗಳನ್ನು ನಿರ್ಮಿಸಿಕೊಳ್ಳಲು ನೀಡಲಾಗುತ್ತಿದ್ದ ಸಹಾಯಧನ ಯೋಜನೆಯನ್ನು ಸ್ಥಗಿತಗೊಳಿಸಲಾಗಿದೆಯೇ; | ಹೌದು.<br>ಕೃಷಿಭಾಗ್ಯ ಯೋಜನೆಯನ್ನು ಸ್ಥಗಿತಗೊಳಿಸಲಾಗಿದೆ. |
| ಆ. | ಹಾಗಿದ್ದಲ್ಲಿ, ಯಾವ ಕಾರಣಕ್ಕೆ ಸ್ಥಗಿತಗೊಳಿಸಲಾಗಿದೆ. | ಸರ್ಕಾರದ ಆದೇಶ ಸಂಖ್ಯೆ: ಕೃಇ 08 ಕೃಯೋಕ 2014, ದಿನಾಂಕ 22.07.2014 ರಲ್ಲಿ ಕೃಷಿ ಭಾಗ್ಯ ಯೋಜನೆಯನ್ನು ಮಿಷನ್ ಮೋಡ್ ಮಾದರಿಯಲ್ಲಿ ಹಂತ ಹಂತವಾಗಿ ಐದು ವರ್ಷಗಳಲ್ಲಿ ಅನುಷ್ಠಾನಗೊಳಿಸಲು ತಿಳಿಸಲಾಗಿದ್ದು, 2020-21 ನೇ ಸಾಲಿನಲ್ಲಿ ಈ ಯೋಜನೆಯಡಿ ಕಳೆದ ಸಾಲಿನಲ್ಲಿ ನಿಯಮಾನುಸಾರ ಅನುಷ್ಠಾನಗೊಂಡಿರುವ ಘಟಕಗಳಿಗೆ ಬಾಕಿ ಸಹಾಯಧನ ಪಾವತಿ ಮಾಡಲು ಮಾತ್ರವೇ ಅನುದಾನ ನಿಗಧಿಯಾಗಿರುತ್ತದೆ. |
| ಇ. | ಹಾಗಿದ್ದಲ್ಲಿ, ಕೃಷಿ ಹೊಂಡಗಳನ್ನು ನಿರ್ಮಿಸಿಕೊಳ್ಳಲು ರೈತರಿಗೆ ಕೃಷಿ ಇಲಾಖೆ ಬೇರೆ ಯಾವ ಯೋಜನೆಯನ್ನು ರೂಪಿಸಿದೆ; | ಕೃಷಿ ಹೊಂಡಗಳನ್ನು ನಿರ್ಮಿಸಿಕೊಳ್ಳಲು ಜಲಾನಯನ ಅಭಿವೃದ್ಧಿ ಇಲಾಖೆಯಲ್ಲಿ ಪ್ರಸ್ತುತ ಈ ಕೆಳಕಂಡ ಯೋಜನೆಗಳಲ್ಲಿ ಅವಕಾಶವಿರುತ್ತದೆ.<br>1. ಪ್ರಧಾನಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ ಘಟಕ<br>2. ಜಲಾನಯನ ಅಭಿವೃದ್ಧಿ ಮೂಲಕ ಬರಗಾಲ ತಡೆಯುವಿಕೆ.<br>3. ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗಖಾತ್ರಿ ಯೋಜನೆ. |

| | | |
|---|---|---|
| ಈ. | ಕೃಷಿ ಹೊಂಡಗಳನ್ನು ನಿರ್ಮಿಸುವ ಬೇಡಿಕೆ ರೈತರಿಂದ ಇರುವುದೇ; | ರೈತರಿಂದ ಯಾವುದೇ ಅರ್ಜಿಗಳು ಸ್ವೀಕೃತವಾಗಿರುವುದಿಲ್ಲ. ಮುಂದುವರೆದು ಜಲಾನಯನ ಅಭಿವೃದ್ಧಿ ಯೋಜನೆಗಳ ವ್ಯಾಪ್ತಿಯಲ್ಲಿ ಬರುವ ಎಲ್ಲಾ ರೈತರು ಸ್ಥಳ ಸೂಕ್ತತೆಗೆ ಅನುಗುಣವಾಗಿ ಕೃಷಿ ಹೊಂಡಗಳನ್ನು ನಿರ್ಮಿಸಿಕೊಳ್ಳಬಹುದಾಗಿದೆ, ಕೃಷಿ ಹೊಂಡ ನಿರ್ಮಿಸಿಕೊಳ್ಳಲು ಪರಿಶಿಷ್ಟ ಜಾತಿ/ಪಂಗಡ, ಸಣ್ಣ, ಅತಿಸಣ್ಣ ರೈತರು ಕನಿಷ್ಠ ಶೇ.5ರಷ್ಟು ಹಾಗೂ ಉಳಿದವರು ಕನಿಷ್ಠ ಶೇ.10ರಷ್ಟು ವಂತಿಗೆಯನ್ನು ಜಲಾನಯನ ಅಭಿವೃದ್ಧಿ ನಿಧಿಗೆ ನೀಡಬೇಕಿರುತ್ತದೆ. |
| ಉ. | ಹಾಗಿದ್ದಲ್ಲಿ ರೈತರ ಅನುಕೂಲತೆಗೆ ಕೃಷಿ ಹೊಂಡ ರಚಿಸಿಕೊಳ್ಳಲು ಸರ್ಕಾರ ಕೈಗೊಳ್ಳಲಾಗುವ ಕ್ರಮಗಳೇನು? | ಪ್ರಧಾನಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ ಘಟಕ ಮತ್ತು ಜಲಾನಯನ ಅಭಿವೃದ್ಧಿ ಮೂಲಕ ಬರಗಾಲ ತಡೆಯುವಿಕೆ ಯೋಜನೆಗಳನ್ನು ಜಲಾನಯನ ತತ್ವದ ಆಧಾರದ ಮೇಲೆ ಯೋಜನಾ ವ್ಯಾಪ್ತಿಯಲ್ಲಿ ಬರುವ ಎಲ್ಲಾ ರೈತರ ಅನುಕೂಲತೆಗೆ ಸ್ಥಳ ಸೂಕ್ತತೆಗೆ ಅನುಗುಣವಾಗಿ ಕೃಷಿ ಹೊಂಡಗಳನ್ನು ರಚಿಸಲು ಕ್ರಮ ವಹಿಸಲಾಗುತ್ತಿದೆ ಹಾಗೂ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗಖಾತ್ರಿ ಯೋಜನೆಯಡಿಯಲ್ಲಿಯೂ ಸಹ ಸ್ಥಳ ಸೂಕ್ತತೆಗೆ ಅನುಗುಣವಾಗಿ ಕೃಷಿ ಹೊಂಡಗಳನ್ನು ರಚಿಸಲು ಕ್ರಮ ವಹಿಸಲಾಗುತ್ತಿದೆ. |

**ಸಂಖ್ಯೆ: AGRI-AML/232/2020**

(ಬಿ.ಸಿ.ಪಾಟೀಲ್)
ಕೃಷಿ ಸಚಿವರು.